**ಗಣಿ ಮತ್ತು ಭೂವಿಜ್ಞಾನ ಇಲಾಖೆ**

**ಸಂಖ್ಯೆ : ಗಭೂಇ/ಉಗ್ರಾಣ/ಎಸ್‌ಟಿಎಸ್–2/ಸರ್ವರ್/2011–12/4977, ದಿನಾಂಕ : 18ನೇ ಜುಲೈ 2011**

**ಪ್ರಕಟಣೆ ಅಧಿಸೂಚನೆ**

M/s. Future Business Tech India (P) Ltd., ಬೆಂಗಳೂರು–70 ಇವರಿಗೆ ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕೇಂದ್ರ ಕಛೇರಿಗೆ HP Proliant DL 580 G5 Server-2 ಸಂಖ್ಯೆ ಉಪಕರಣಗಳನ್ನು ದಿನಾಂಕ : 13–12–2010ರೊಳಗೆ ಸರಬರಾಜು ಮಾಡುವಂತೆ ಖರೀದಿ ಆದೇಶ ನೀಡಲಾಗಿತ್ತು. ಆದರೆ ಉಪಕರಣಗಳನ್ನು ಏಪ್ರಿಲ್ 10 ರವರೆಗೆ ಸರಬರಾಜು ಮಾಡದೇ ದಿನಾಂಕ : 11–04–2011 ರಂದು ಪತ್ರ ಬರೆದು ಉಪಕರಣ ಸರಬರಾಜು ಮಾಡಲು ಸಿದ್ಧವಿರುವುದಾಗಿ ತಿಳಿಸಿರುವಿರಿ. ಈ ಉಪಕರಣವು ಇಲಾಖೆಯ ಉಪಯೋಗಕ್ಕೆ ತೀರಾ ಅವಶ್ಯಕವಾಗಿದ್ದು, ಕಾಲಮಿತಿಯೊಳಗೆ ಉಪಕರಣ ಸರಬರಾಜು ಮಾಡಲು ವಿಫಲರಾಗಿದ್ದಾರೆ. ಇದರಿಂದ ಸರ್ಕಾರದ ಕೆಲಸ ಕುಂಠಿತವಾಗಿದ್ದು. DGS & D RC ನ ಶೆಡ್ಯೂಲ್ B ರಲ್ಲಿ ತಿಳಿಸಿರುವ ನಿಬಂಧನೆಯ ಕ್ರ.ಸಂ. 9ನ್ನು ಉಲ್ಲಂಘಿಸಿ ಸರ್ಕಾರದ ಕೆಲಸ ಕುಂಠಿತವಾಗಲು ಕಾರಣಕರ್ತರಾದ ಕಾರಣ ಸರಬರಾಜು ಆದೇಶವನ್ನು ರದ್ದುಪಡಿಸಲಾಗಿದೆ.

ಈ ರೀತಿ ನೀವು ವಿಳಂಬ ನೀತಿ ಅನುಸರಿಸಿ ಸರ್ಕಾರದ ಕೆಲಸ ಕಾರ್ಯಗಳು ಕುಂಠಿತವಾಗಲು ಕಾರಣಕರ್ತರಾಗಿರುವುದರಿಂದ ಈ ಸಂಸ್ಥೆಯನ್ನು 5 ವರ್ಷಗಳ ಅವಧಿಗೆ ಕಪ್ಪುಪಟ್ಟಿಗೆ (Block List)ಗೆ ಸೇರಿಸಲು ಕ್ರಮ ಕೈಗೊಳ್ಳಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂವಿಜ್ಞಾನ ಇಲಾಖೆ

**ಪಿ.ಆರ್. 737**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–1**

**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಸಂಖ್ಯೆ : ಡಬ್ಲ್ಯೂ ಸಿಎ/ಸಿಆರ್–23/2011ಎಫ್, ದಿನಾಂಕ: 12ನೇ ಜುಲೈ 2011**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ಗುಲಾಬಿ W/o late ಅನ್ನು ವರ್ಷ 45<br>2) ಶ್ರೀ ಶಿವಾನಂದ A. S/o late ಅನ್ನು ವರ್ಷ 26<br>3) ಕುಮಾರಿ ಸುನೀತ A. D/o late ಅನ್ನು ವರ್ಷ 24<br>ವಿಳಾಸ : ಆದರ್ಶನಗರ, ಪಲಾಡ್ಕ ಪೋಸ್ಟ್, ಮಂಗಳೂರು ತಾಲ್ಲೂಕು | | 1) ಶ್ರೀ ಪ್ರವೀಣ ಸಿಕ್ವೇರಾ S/o ಪೀಟರ್ ಸಿಕ್ವೇರಾ ವರ್ಷ 30, ಪ್ರಜ್ವಲ್ ಸೌಧ, H. No. 4–142–3, ಪಲಾಡ್ಕ Post & ವಿಲೇಜ್, ಮಂಗಳೂರು<br>2) ಶ್ರೀರಾಮ ಜನರಲ್ ಇನ್ಶೂರೆನ್ಸ್ ಕಂ., ಲಿ., 10003, E8 RIICO Industrial Area Sitapur, Jaipur, Rajastan-302 022 |

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಗುಲಾಬಿ W/o late ಅನ್ನು ಇವರು ತಮ್ಮ ಮಗನಾದ ಶ್ರೀ ಸುರೇಂದ್ರ, ಇವರು 1ನೇ ಪ್ರತಿವಾದಿಗಳಾದ ಪ್ರವೀಣ ಸಿಕ್ವೇರಾ, ಇವರ ಲಾರಿ ಸಂಖ್ಯೆ KA-19A-1877 ರಲ್ಲಿ ಲಾರಿ ಕ್ಲೀನರ್ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ : 07–06–2011ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟನೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ–1, ಮಂಗಳೂರು

**ಪಿ.ಆರ್. 720**

**ಕಂದಾಯ ಇಲಾಖೆ**

**ಸಂಖ್ಯೆ:ಆರ್‌ಡಿ:197:ಭೂದಾಸ:2011, ದಿನಾಂಕ:22–07–2011**

**ಅಧಿಸೂಚನೆ**

**ವಿಷಯ:** ನಗರಮಾಪನಕ್ಕೆ ಸಂಬಂಧಪಟ್ಟಂತೆ ಹಾಲಿ ಚಾಲ್ತಿಯಲ್ಲಿರುವ ಯು.ಪಿ.ಓ.ಆರ್. ಯೋಜನೆಯಲ್ಲಿ ಅಳವಡಿಸಿಕೊಳ್ಳಲಾಗುತ್ತಿರುವ ಪಿ.ಆರ್.ಕಾರ್ಡ್ ನಮೂನೆಯಲ್ಲಿ ಕೆಲವು ಹೆಚ್ಚುವರಿ ಅಂಶಗಳನ್ನು ಸೇರಿಸುವ ಬಗ್ಗೆ.

ನಗರ ಆಸ್ತಿಗಳಿಗೆ ಸಂಬಂಧಪಟ್ಟಂತೆ ವಿಚಾರಣೆಯಾದ ನಂತರ ತಯಾರಿಸಬೇಕಾದ ದಾಖಲೆಗಳ ಬಗ್ಗೆ ಕರ್ನಾಟಕ ಭೂಕಂದಾಯ ನಿಯಮಾವಳಿ 1966 ರ ನಿಯಮ 83(2) ಅಡಿಯಲ್ಲಿ ಅವಕಾಶ ಕಲ್ಪಿಸಲಾಗಿದ್ದು, ಈ ಪೈಕಿ ಆಸ್ತಿ ಪ್ರಕಟಣಾ ಪತ್ರ (Property Card) ವನ್ನು ನಮೂನೆ 13ರಲ್ಲಿ ತಯಾರಿಸಬೇಕಿರುತ್ತದೆ.

ಆಸ್ತಿಧಾರಕರ ಹಿತದೃಷ್ಟಿಯಿಂದ ಈ ದಾಖಲೆಯು ಮಹತ್ವಪೂರ್ಣ ದಾಖಲೆಯಾಗಿರುತ್ತದೆ ಅಲ್ಲದೆ ಆಧುನಿಕ ತಂತ್ರಜ್ಞಾನದ ಬಳಕೆಯಿಂದ ರಾಜ್ಯದ ಆಯ್ದ 05 ನಗರಾಸ್ತಿಗಳನ್ನು ಅಳತೆ ಮಾಡಿ ಹಕ್ಕುದಾಖಲೆಗಳನ್ನು ತಯಾರಿಸುವ (ಯು,ಪಿ.ಓ.ಆರ್) ಯೋಜನೆಯು ಸಹ ಜಾರಿಯಲ್ಲಿರುತ್ತದೆ. ನಗರಮಾಪನ ಕಾರ್ಯದಲ್ಲಿ ಹಾಲಿ ಬಳಸುತ್ತಿರುವ ನಮೂನೆಗಳು ಆಧುನಿಕ ತಂತ್ರಜ್ಞಾನದಲ್ಲಿ ಲಭ್ಯವಾಗುವ ಮಾಹಿತಿಗಳನ್ನು ಹಾಗೂ ನಕ್ಷೆಯನ್ನು ಅಳವಡಿಸಲು ಸೂಕ್ತವಲ್ಲವಾದ್ದರಿಂದ ಅವುಗಳನ್ನು ಮಾರ್ಪಡಿಸುವುದು ಅವಶ್ಯಕವೆಂದು ಸರ್ಕಾರ ಮನಗಂಡಿದೆ. ಆದುದರಿಂದ, ಈ ಸುತ್ತೋಲೆಯೊಂದಿಗೆ ಆಸ್ತಿಧಾರಕರಿಗೆ ವಿತರಿಸಲು ಪ್ರಸ್ತಾಪಿಸಿರುವ ಆಸ್ತಿ ಪ್ರಕಟಣಾ ಪತ್ರಗಳ ವಿವಿಧ ನಮೂನೆಗಳನ್ನು ಆಂಗ್ಲ ಹಾಗೂ ಕನ್ನಡ ಭಾಷೆಯಲ್ಲಿ ಈ ಮೂಲಕ ಪ್ರಕಟಿಸಲಾಗಿದೆ. ಈ ನಮೂನೆಗಳ ಬಗ್ಗೆ ಯಾವುದೇ ಆಕ್ಷೇಪಣೆಗಳಿದ್ದಲ್ಲಿ ಇವುಗಳು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ ಆದ ದಿನಾಂಕದಿಂದ 15 ದಿನದೊಳಗೆ ಸರ್ಕಾರದ ಕಾರ್ಯದರ್ಶಿಗಳು (ಭೂಮಿ ಮತ್ತು ಯುಪಿಓಆರ್) ಕಂದಾಯ ಇಲಾಖೆ ಇವರಿಗೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ.ಚೌಕೀಮಠ,**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂಮಾಪನ)

GOVERNMENT OF KARNATAKA

ಕರ್ನಾಟಕ ಸರ್ಕಾರ

URBAN PROPERTY OWNERSHIP RECORDS

ನಗರಾಸ್ತಿ ಮಾಲೀಕತ್ವದ ಹಕ್ಕುದಾಖಲೆಗಳು

**PROPERTY CARD** ಆಸ್ತಿ ಪ್ರಕಟಣ ಪತ್ರ

**CITY:**
ನಗರ

**Title No:**
ಹಕ್ಕೋಲೆ ಸಂಖ್ಯೆ

**TITLE SHEET AND CADASTRAL MAP EXTRACT**

ಹಕ್ಕೋಲೆ ಮತ್ತು ಕೆಡಸ್ಟ್ರಿಯಲ್ ನಕ್ಷೆಯ ಉದ್ಧೃತ

**PROPERTY CERTIFICATE IS ISSUED PURSUANT TO RULE 83(2) OF CHAPTER XII OF THE KARNATAKA LAND REVENUE RULES 1966**

ಆಸ್ತಿಯ ಪ್ರಮಾಣ ಪತ್ರವನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966 ರ ನಿಯಮ 83(2), ಅಧ್ಯಾಯ XII ರ ಮೇರೆಗೆ ವಿತರಿಸಲಾಗಿದೆ.

**CADASTRAL UNIT NUMBER:**
ಕೆಡಸ್ಟ್ರಿಯಲ್ ಘಟಕ ಸಂಖ್ಯೆ:

**UPOR NUMBER:**
ಯುಪಿಓಆರ್ ಸಂಖ್ಯೆ :

URBAN PROPERTY OWNERSHIP RECORDS

ನಗರಾಸ್ತಿ ಮಾಲೀಕತ್ವದ ಹಕ್ಕುದಾಖಲೆಗಳು

**PROPERTY CARD** ಆಸ್ತಿ ಪ್ರಕಟಣ ಪತ್ರ

**CITY:**
ನಗರ

**Title No:**
ಹಕ್ಕೋಲೆ ಸಂಖ್ಯೆ

**PART A - PROPERTY INFORMATION**

**ಭಾಗ ಎ – ಆಸ್ತಿಯ ಬಗ್ಗೆ ಮಾಹಿತಿ**

**SECTION A- PROPERTY SECTION**

**ಎ – ಆಸ್ತಿ ಪರಿಚ್ಛೇದ**

| | |
|---|---|
| **CADASTRAL UNIT NUMBER**<br>ಕೆಡಸ್ಟ್ರೀಯಲ್ ಘಟಕ ಸಂಖ್ಯೆ: | |
| **UPOR Number:**<br>ಯುಪಿಓಆರ್ ಸಂಖ್ಯೆ: | |
| **Property Type:**<br>ಆಸ್ತಿಯ ತರಹೆ: | |
| **PROPERTY USE:**<br>ಆಸ್ತಿಯ ಬಳಕೆ: | |
| **PLOT AREA :**<br>ನಿವೇಶನದ ವಿಸ್ತೀರ್ಣ: | |
| **Remarks:**<br>ಷರಾ : | |

## SHARED PLOTS -ನಿವೇಶನದ ಭಾಗ

**The following shared plot(s) are accessory to these subjects to the pro-indiviso extent specified.**
ಈ ಕೆಳಗೆ ತಿಳಿಸಿರುವ ನಿವೇಶನದ ಭಾಗಗಳಿಗೆ ತೋರಿಸಿರುವ ವಿಸ್ತೀರ್ಣಕ್ಕೆ ಪ್ರವೇಶಾವಕಾಶ ನೀಡಲಾಗಿರುತ್ತದೆ

| **PROPERTY NO.**<br>ಆಸ್ತಿಯ ಸಂಖ್ಯೆ | **SHARE**<br>ಭಾಗ |
|---|---|
| | |

GOVERNMENT OF KARNATAKA

ಕರ್ನಾಟಕ ಸರ್ಕಾರ

URBAN PROPERTY OWNERSHIP RECORDS

ನಗರಾಸ್ತಿ ಮಾಲೀಕತ್ವದ ಹಕ್ಕುದಾಖಲೆಗಳು

**PROPERTY CARD** ಆಸ್ತಿ ಪ್ರಕಟಣ ಪತ್ರ

**CITY:** **Title No:**

ನಗರ ಹಕ್ಕೋಲೆ ಸಂಖ್ಯೆ

## SECTION B - OWNERSHIP SECTION

## ಬಿ - ಮಾಲೀಕತ್ವದ ಪರಿಚ್ಛೇದ

| | |
|---|---|
| **OWNERS NAME:**<br>ಮಾಲೀಕರ ಹೆಸರು | |
| **Mutation Register No**<br>ಮ್ಯುಟೇಷನ್ ವಹಿಯ ಸಂಖ್ಯೆ | |
| **Source of ownership information**<br>ಮಾಲೀಕತ್ವದ ಮಾಹಿತಿಯ ಮೂಲ<br>**a. Deed Number**<br>ದಸ್ತಾವೇಜಿನ ಸಂಖ್ಯೆ<br>**b. Date of Registration**<br>ನೋಂದಣಿ ದಿನಾಂಕ<br>**c. Place of Registration**<br>ನೋಂದಣಿಯಾದ ಸ್ಥಳ,<br>**d. Amount**<br>ಮೊತ್ತ. | |

## LEASE DETAILS

## ಗುತ್ತಿಗೆ ವಿವರಗಳು

| | |
|---|---|
| **NAME OF THE LESSEE:**<br>ಗುತ್ತಿಗೆದಾರರ ಹೆಸರು | |
| **LEASE DETAILS:**<br>ಗುತ್ತಿಗೆ ವಿವರಗಳು | |

GOVERNMENT OF KARNATAKA

ಕರ್ನಾಟಕ ಸರ್ಕಾರ

URBAN PROPERTY OWNERSHIP RECORDS

ನಗರಾಸ್ತಿ ಮಾಲೀಕತ್ವದ ಹಕ್ಕುದಾಖಲೆಗಳು

**PROPERTY CARD** ಆಸ್ತಿ ಪ್ರಕಟಣ ಪತ್ರ

**CITY:**
ನಗರ

**Title No:**
ಹಕ್ಕೋಲೆ ಸಂಖ್ಯೆ

## SECTION C - SECURITIES SECTION
## ಸಿ- ಭದ್ರತಾ ಪರಿಚ್ಛೇದ

| **Sl.No** ಕ್ರಮ ಸಂಖ್ಯೆ | **Type** ತರಹೆ, | **Description** ವಿವರಣೆ, | **Remarks** ಷರಾ |
|---|---|---|---|
| **1** | | Number :<br>ಸಂಖ್ಯೆ<br>Date :<br>ದಿನಾಂಕ<br>Amount :<br>ಮೊತ್ತ.<br>Bank / financial institutions name:<br>ಬ್ಯಾಂಕ್ /ಆರ್ಥಿಕ ಸಂಸ್ಥೆಯ ಹೆಸರು<br>Period:<br>ಅವಧಿ | |

GOVERNMENT OF KARNATAKA

ಕರ್ನಾಟಕ ಸರ್ಕಾರ

URBAN PROPERTY OWNERSHIP RECORDS

ನಗರಾಸ್ತಿ ಮಾಲೀಕತ್ವದ ಹಕ್ಕುದಾಖಲೆಗಳು

**PROPERTY CARD** ಆಸ್ತಿ ಪ್ರಕಟಣ ಪತ್ರ

**CITY:**
ನಗರ

**Title No:**
ಹಕ್ಕೋಲೆ ಸಂಖ್ಯೆ

## SECTION D – BURDENS SECTION
## ಡಿ - ಹೊಣೆ ಪರಿಚ್ಛೇದ

| **SL. No** ಕ್ರಮ ಸಂಖ್ಯೆ | **Type** ತರಹೆ, | **Description** ವಿವರಣೆ, | **Remarks** ಷರಾ |
|---|---|---|---|
| **1** | Government Restriction<br>ಸರ್ಕಾರಿ ಪರಿಮಿತಿ/ ನಿರ್ಬಂಧ | Order Number :<br>ಆದೇಶ ಸಂಖ್ಯೆ<br>Order Date :<br>ಆದೇಶದ ದಿನಾಂಕ<br>Restriction Details :<br>ನಿರ್ಬಂಧದ ವಿವರ: | |

| | | | |
|---|---|---|---|
| **2** | Court Stay<br>ತಡೆಯಾಜ್ಞೆ | Court Name :District Civil court ನ್ಯಾಯಾಲಯದ ಹೆಸರು – ಜಿಲ್ಲಾ ಸಿವಿಲ್ ನ್ಯಾಯಾಲಯ<br>Case Number : ಮೊಕದ್ದಮೆ ಸಂಖ್ಯೆ<br>Case Date : ಮೊಕದ್ದಮೆ ದಿನಾಂಕ<br>Name of the Disputants :<br>ತಕರಾರುದಾರರ ಹೆಸರು<br>Details:<br>ವಿವರ : | |
| **3** | Easement Right<br>ಎರವಲುಬಳಕೆಯ ಹಕ್ಕು | | |

GOVERNMENT OF KARNATAKA

ಕರ್ನಾಟಕ ಸರ್ಕಾರ

URBAN PROPERTY OWNERSHIP RECORDS

ನಗರಾಸ್ತಿ ಮಾಲೀಕತ್ವದ ಹಕ್ಕುದಾಖಲೆಗಳು

**PROPERTY CARD** ಆಸ್ತಿ ಪ್ರಕಟಣ ಪತ್ರ

**CITY:** ನಗರ

**Title No:** ಹಕ್ಕೋಲೆ ಸಂಖ್ಯೆ

## SECTION E- CADASTRAL SECTION
## ಇ - ಕೆಡಸ್ಟ್ರಿಯಲ್ ಪರಿಚ್ಛೇದ

| **DETAILED PARCEL MAP (SCALE)**<br>ಸವಿಸ್ತಾರ ಆಸ್ತಿ ನಕ್ಷೆ, (ಮಾಪನ) | **MAP REFERENCE (NOT TO SCALE)**<br>ಚೆಕ್ಕುಬಂದಿ ವಿವರಗಳು (ಮಾಪನಕ್ಕೆ ಒಳಪಟ್ಟಿಲ್ಲ.) |
|---|---|
| <br>Co-ordinates & dimensions> ಕೋ-ಆರ್ಡಿನೇಟ್ಸ್ ಮತ್ತು ಅಳತೆಗಳು<br> |  |

**Note:** 1. In case of apartment, parcel map pertains to plot on which building exists 2. Contents of overview are not part of signed XML 3. This is digitally signed document, manual signature is not required. 4. Barcode contains the digital signature information, don't damage it.

1. ಬಹುಮಹಡಿಕಟ್ಟಡವಾಗಿದ್ದಲ್ಲಿ ಆಸ್ತಿ ನಕ್ಷೆಯು ಯಾವ ನಿವೇಶನದಲ್ಲಿ ಆಸ್ತಿ ಇರುವುದೋ ಅದಕ್ಕೆ ಸಂಬಂದಿಸಿದ್ದಾಗಿರುತ್ತದೆ. 2. Contents of overview ಸಹಿಯಾದ XML ಭಾಗವಾಗಿರುವುದಿಲ್ಲ. 3. ದಾಖಲೆಯ ಮೇಲೆ ಡಿಜಿಟಲ್ ಸಹಿ ಇರುವುದರಿಂದ ಪುನ: ಸಹಿ ಮಾಡುವ ಅವಶ್ಯಕತೆ ಇರುವುದಿಲ್ಲ. 4. ಬಾರ್ ಕೋಡಿನಲ್ಲಿ ಡಿಜಿಟಲ್ ಸಹಿ ಮಾಹಿತಿ ಇರುವುದರಿಂದ ಅದನ್ನು ನಾಶಮಾಡಬಾರದು.

**Date of Printing:**

ಮುದ್ರಿಸಿದ ದಿನಾಂಕ:

GOVERNMENT OF KARNATAKA

ಕರ್ನಾಟಕ ಸರ್ಕಾರ

URBAN PROPERTY OWNERSHIP RECORDS

ನಗರಾಸ್ತಿ ಮಾಲೀಕತ್ವದ ಹಕ್ಕುದಾಖಲೆಗಳು

**PROPERTY CARD** ಆಸ್ತಿ ಪ್ರಕಟಣ ಪತ್ರ

**CITY:** ನಗರ

**Title No:** ಹಕ್ಕೋಲೆ ಸಂಖ್ಯೆ

## Part B

## ಭಾಗ ಬಿ

## Ownership Identity

## ಮಾಲೀಕತ್ವದ ಗುರುತು

## SECTION F – Identity

## ಪರಿಚ್ಛೇದ ಎಫ್ - ಸ್ವರೂಪ

| Sl.No ಕ್ರಮ ಸಂಖ್ಯೆ | Name of the owner ಮಾಲೀಕರ ಹೆಸರು | Identity used ಬಳಸಿರುವ ಗುರುತು | Holder Photo ಮಾಲೀಕರ ಭಾವಚಿತ್ರ |
|---|---|---|---|
| 1 | | | |

| | | | |
|---|---|---|---|
| 2 | | | |

GOVERNMENT OF KARNATAKA

ಕರ್ನಾಟಕ ಸರ್ಕಾರ

URBAN PROPERTY OWNERSHIP RECORDS

ನಗರಾಸ್ತಿ ಮಾಲೀಕತ್ವದ ಹಕ್ಕುದಾಖಲೆಗಳು

**PROPERTY CARD** ಆಸ್ತಿ ಪ್ರಕಟಣ ಪತ್ರ

**CITY:** ನಗರ

**Title No:** ಹಕ್ಕೋಲೆ ಸಂಖ್ಯೆ

## SECTION G –Urban Local Bodies Information
## ಪರಿಚ್ಛೇದ ಜಿ - ನಗರಾಭಿವೃದ್ಧಿ ಪ್ರಾಧಿಕಾರದ ವಿವರಗಳು

| | |
|---|---|
| **ADDRESS**<br>ವಿಳಾಸ | |
| **Ward Name**<br>ವಾರ್ಡ್ ಸಂಖ್ಯೆ | |
| **Municipal khatha Number**<br>ಮುನಿಸಿಪಲ್ ಖಾತಾ ಸಂಖ್ಯೆ | |
| **Property Id**<br>ಆಸ್ತಿಯ ಗುರುತು ಸಂಖ್ಯೆ | |

**ಬಿ.ವಿ.ಚೌಕೀಮಠ,**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

**ಪಿ.ಆರ್.744**

**ಜಿಲ್ಲಾ ಅಧಿಕಾರಿಗಳ ಕಚೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ಸಂಖ್ಯೆ.ಡಿಬಿಸಿಎಂ/ಬೆಂಗ್ರಾ/ಕಾತ/ಸಿಆರ್–60/2011–12, ದಿನಾಂಕ:2/7/2011.**

**ಪ್ರ ಕ ಟ ಣೆ**

**ವಿಷಯ:** 2011–12ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹಿಂದುಳಿದ ವರ್ಗಗಳ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂ: ಎಸ್‌ಡಬ್ಲ್ಯೂ ಎಲ್ 60 ಎಸ್.ಇ.ಡಬ್ಲ್ಯೂ 89, ದಿನಾಂಕ:2/11/1990.
2) ಸರ್ಕಾರಿ ಆದೇಶ ಸಂ:ಸಕಇ 116 ಬಿಎಂಎಸ್ 99, ದಿನಾಂಕ:7/10/99.
3) ಸರ್ಕಾರಿ ಆದೇಶ ಸಂ: ಸಕಇ 446, ಬಿಎಂಎಸ್ 2005, ಬೆಂಗಳೂರು ದಿನಾಂಕ: 1/12/2005.

2011–12ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದ (ವರ್ಗ–1, 2ಎ, 3ಎ ಮತ್ತು 3ಬಿ) ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ 4 ವರ್ಷಗಳ ಅವಧಿಗೆ ತರಬೇತಿಗೆ ಅರ್ಹ ಅಭ್ಯರ್ಥಿಗಳ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ನಿಗದಿತ ಅವಧಿಯೊಳಗೆ ಕಛೇರಿ ವೇಳೆಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಡಾ:ಅಂಬೇಡ್ಕರ್ ಬೀದಿ, ಬೆಂಗಳೂರು, ಇಲ್ಲಿಗೆ ದಿನಾಂಕ:30/7/2011 ರೊಳಗೆ ಸಲ್ಲಿಸುವುದು.

<u>ನಿಬಂಧನೆಗಳು</u>:–

1. ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿಯನ್ನು ಮುಗಿಸಿ 2 (ಎರಡು) ವರ್ಷಗಳು ಮೀರಿರಬಾರದು.

2. ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್ ಡಬ್ಲ್ಯೂ ಡಿ 225 ಬಿ ಸಿ ಎ 2000, ದಿನಾಂಕ:30/3/2002ರ ಆದೇಶದ ಅನುಸಾರ ಹಿಂದುಳಿದ ವರ್ಗ–1, 2ಎ, 3ಎ ಮತ್ತು 3ಬಿ ವರ್ಗೀಕರಣಕ್ಕೆ ಒಳಪಟ್ಟಿರಬೇಕು. ಹಾಗೂ ಮೇಲ್ಕಂಡ ವರ್ಗಗಳಿಗೆ ನಿಗಧಿಪಡಿಸಲಾದ ಜಾತಿ ಆದಾಯ ಪ್ರಮಾಣ ಪತ್ರಗಳೊಂದಿಗೆ ವಿವರಗಳನ್ನು ಭರ್ತಿ ಮಾಡಿ, ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.
3. ಪ್ರವರ್ಗ–1 ನ್ನು ಹೊರತುಪಡಿಸಿ ಇತರೆ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ರೂ. 15,000/–ಗಳ ವಾರ್ಷಿಕ ಆದಾಯ ಮಿತಿಯನ್ನು ನಿಗದಿಪಡಿಸಿದೆ.
4. ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು. (ಪ್ರತಿ ಲಗತ್ತಿಸಬೇಕು)
5. ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗಧಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳನ್ನು ಮೀರಿರಬಾರದು. ಅಂದರೆ ವರ್ಗ–1ರ ಅಭ್ಯರ್ಥಿಗಳಿಗೆ 1 ವರ್ಷ ರಿಯಾಯಿತಿ ಇದ್ದು, ಅವರ ವಯಸ್ಸು 31 ವರ್ಷಗಳು ಮೀರಿರಬಾರದು.
6. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಅವಧಿಯೊಳಗೆ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಹಾಗೂ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟುಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10 ರ ಬಡ್ಡಿಯೊಂದಿಗೆ ಭೂ ಕಂದಾಯದ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಆದರೆ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರದಲ್ಲಿ ವಿವಿಧ ಹುದ್ದೆಗಳಿಗೆ ನೇಮಕಾತಿ ಹೊಂದಿದ ಅಭ್ಯರ್ಥಿಗಳಿಗೆ ಅನ್ವಯಿಸುವುದಿಲ್ಲ..
7. ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ತಿಂಗಳಿಗೆ ರೂ. 1000/–ಗಳ ತರಬೇತಿ ಭತ್ಯೆಯನ್ನು ದಿನಚರಿ ಆಧಾರದ ಮೇರೆಗೆ ನೀಡಲಾಗುವುದು.
8. ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್/ ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಆಯ್ಕೆಯಾದ ಅಭ್ಯರ್ಥಿಗಳನ್ನು ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ನಿಯೋಜಿಸಲಾಗುವುದು.
9. ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಕಾಲಕಾಲಕ್ಕೆ ಹೊಂದಿರುವ ಸರ್ಕಾರದ ಆದೇಶಗಳಿಗೆ ಬದ್ದನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.
10. ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.
11. ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯ ಸಂದರ್ಶನದ ದಿನಾಂಕ ಹಾಗೂ ಸ್ಥಳವನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.
12. ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮ ದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.
13. ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ:30/7/2011.

ಸದಸ್ಯ ಕಾರ್ಯದರ್ಶಿಗಳು ಹಾಗೂ
ಜಿಲ್ಲಾ ಅಧಿಕಾರಿಗಳು
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಜಿಲ್ಲಾ ಅಧಿಕಾರಿಗಳ ಕಚೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.**

**ಸಂಖ್ಯೆ:ಡಿಬಿಸಿಎಂ/ಬೆಂಗ್ರಾ/ಕಾ.ತ/ಸಿಆರ್–61/2011–12, ದಿನಾಂಕ:1/7/2011.**

**ಪ್ರ ಕ ಟ ಣೆ**

**ವಿಷಯ:** 2011–12 ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂ: ಎಸ್‌ಡಬ್ಲ್ಯೂಎಲ್ 68 ಎಸ್.ಇ.ಡಬ್ಲ್ಯೂ 89, ದಿನಾಂಕ:2/11/1990.

2) ಸರ್ಕಾರದ ಆದೇಶ ಸಂ: ಸಕಇ 205 ಬಿಎಂಎಸ್ 99, ದಿನಾಂಕ:7/10/1999.

3) ಸರ್ಕಾರಿ ಆದೇಶ ಸಂ: ಸಕಇ 446 ಬಿಎಂಎಸ್ 2005 ಬೆಂಗಳೂರು, ದಿನಾಂಕ:1/12/2005.

2011–12ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿರುವ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಭೌದ್ಧರು, ಸಿಖರು ಹಾಗೂ ಪಾರ್ಸಿ ಸಮುದಾಯಕ್ಕೆ ಸೇರಿದ ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ 4 ವರ್ಷಗಳ ಅವಧಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಹ ಮತೀಯ ಅಲ್ಪಸಂಖ್ಯಾತರಿಗೆ ಸೇರಿದ ಈ ಕೆಳಕಂಡ ನಿಬಂಧನೆಗಳನ್ನು ಪಾಲಿಸಿ ಕಾನೂನು ಪದವೀಧರ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಈ ಕಚೇರಿಯಲ್ಲಿ ನಿಗದಿತ ಅವಧಿಯೊಳಗೆ ಕಚೇರಿ ವೇಳೆಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಆಯ್ಕೆ ಸಮಿತಿ ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ:ಅಂಬೇಡ್ಕರ್ ಬೀದಿ, ಬೆಂಗಳೂರು, ಇವರ ಕಚೇರಿಯಲ್ಲಿ ದಿನಾಂಕ:30–7–2011ರೊಳಗೆ ಕಚೇರಿ ವೇಳೆಯಲ್ಲಿ ಸಲ್ಲಿಸುವುದು.

**ನಿಬಂಧನೆಗಳು:–**

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿಯನ್ನು ಮುಗಿಸಿ 2 (ಎರಡು) ವರ್ಷಗಳು ಮೀರಿರಬಾರದು.

2) ಅಭ್ಯರ್ಥಿಗಳು ಮತೀಯ ಅಲ್ಪಸಂಖ್ಯಾತರ ಸಮುದಾಯವಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು, ಸಿಖರು, ಪಾರ್ಸಿ ಹಾಗೂ ಬೌದ್ಧರು ಇವುಗಳಿಗೆ ಸೇರಿರಬೇಕು ಹಾಗೂ ಸರ್ಕಾರದಿಂದ ನಿಗದಿಪಡಿಸಲಾದ ಜಾತಿ ಆದಾಯ ಪರಿಶೀಲನಾ ಪ್ರಮಾಣ ಪತ್ರವನ್ನು ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

3) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

4) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳನ್ನು ಮೀರಿರಬಾರದು.

5) ಅಭ್ಯರ್ಥಿಯ ಕೌಟುಂಬಿಕ ವಾರ್ಷಿಕ ವರಮಾನ ರೂ.15,000/–ಕ್ಕೆ ಮೀರಿರಬಾರದು. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮದ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಆದರೆ ಕೇಂದ್ರ ಸರ್ಕಾರ/ರಾಜ್ಯ ಸರ್ಕಾರದಲ್ಲಿ ನೇಮಕಾತಿ ಹೊಂದಿರುವ ಅಭ್ಯರ್ಥಿಗಳಿಗೆ ಈ ಷರತ್ತು ಅನ್ವಯಿಸುವುದಿಲ್ಲ.

6) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ತಿಂಗಳಿಗೆ ರೂ.1000/–ಗಳ ತರಬೇತಿ ಭತ್ಯೆಯನ್ನು ನೀಡಲಾಗುವುದು.

7) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಸಮಿತಿಯು ಪಬ್ಲಿಕ್ ಪ್ರಾಸಿಕ್ಯೂಟರ್/ಸರ್ಕಾರಿ ವಕೀಲರು ಅಥವಾ 20 (ಇಪ್ಪತ್ತು) ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ಕಳುಹಿಸಿ ಕೊಡಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಸರ್ಕಾರದ ಆದೇಶಗಳಿಗೆ ಬದ್ದನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.

9) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ/ದಾಖಲೆಗಳನ್ನು ನೀಡಿದ್ದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟುಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10ರ ಬಡ್ಡಿಯೊಂದಿಗೆ ಭೂ ಕಂದಾಯದ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.

(10) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ:ಅಂಬೇಡ್ಕರ್ ಬೀದಿ, ಬೆಂಗಳೂರು–1 ಇವರ ಕಚೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

(11) ಅರ್ಹ ಅಭ್ಯರ್ಥಿಗಳನ್ನು ತರಬೇತಿಗೆ ಆಯ್ಕೆ ಮಾಡಲು ಸಂದರ್ಶನದ ದಿನಾಂಕ ಹಾಗೂ ಸ್ಥಳವನ್ನು ತಿಳಿಸಲಾಗುವುದು. ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

12) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮ ದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ.ಅಂಕಪಟ್ಟಿ ಅಥವಾ ಟಿ.ಸಿ.ದೃಢೀಕೃತ ಪ್ರತಿ ಹಾಗೂ ಆಹಾರ ಪಡಿತರ ಚೀಟಿ ಅಥವಾ ತಹಶೀಲ್ದಾರ್‌ರವರಿಂದ ಪಡೆದ ವಾಸಸ್ಥಳದ ದೃಢೀಕೃತ ಪತ್ರ ಸಲ್ಲಿಸಬೇಕು.

13) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕ, ವೇಳೆ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

14) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ:30–7–2011.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಪಿ.ಆರ್. 708**

**ಉಪ ಆಯುಕ್ತರು(ಭೂಸ್ವಾಧೀನ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರ ಕಾರ್ಯಾಲಯ,**

**ಕೇಂದ್ರ ಕಛೇರಿ, ನಗರಪಾಲಿಕೆ ಕಟ್ಟಡಗಳು, 1ನೇ ಮಹಡಿ, ಮೇಜರ್ ರೋಡ್ಸ್ ಬಿಲ್ಡಿಂಗ್, ನರಸಿಂಹರಾಜು ವೃತ್ತ, ಬೆಂಗಳೂರು.**

**ಭೂ ಅರ್ಜನೆ ಅಧಿನಿಯಮದ 4(1)ನೇ ಪ್ರಕರಣದ ಮೇರೆಗೆ ಅಧಿಸೂಚನೆ**

**ಕ್ರಮಾಂಕ:ಎಲ್.ಎ.ಕ್ಯೂ/ಸಿ.ಆರ್/34/2009–10, ದಿನಾಂಕ: 27/08/2011**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಆರ್.ಎಂ.ವಿ. 2ನೇ ಹಂತದ 8ನೇ ಮುಖ್ಯರಸ್ತೆಯಲ್ಲಿನ ನಿವೇಶನ ಸಂಖ್ಯೆ: 1 ರಿಂದ 7 ರವರೆಗಿನ ಆಸ್ತಿಗಳಲ್ಲಿನ ಒಟ್ಟು 8194.42 ಚ.ಅ. ಜಾಗವು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಮುಖ್ಯ ಮಳೆ ನೀರುಗಾಲುವೆ ಅಗಲೀಕರಣಕ್ಕಾಗಿ ಅವಶ್ಯಕವಾಗಿ ಬೇಕಾಗಿರುತ್ತದೆ ಎಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಕಂಡುಬಂದಿರುವುದರಿಂದ:

1976ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ಸ್ ಕಾಯ್ದೆಯ ಕಲಂ 177 ಮತ್ತು ಕರ್ನಾಟಕ ಅಧಿನಿಯಮ ಸಂಖ್ಯೆ:33ರ ಮೂಲಕ ತಿದ್ದುಪಡಿಯಾದ 1991ನೇ ಸಾಲಿನ ಭೂ ಸ್ವಾಧೀನ ಅಧಿನಿಯಮ 1894ರ (ಕೇಂದ್ರ ಅಧಿನಿಯಮ, ಸಂಖ್ಯೆ:1894ರ 1) 4ನೇ ಪ್ರಕರಣದ–(1)ನೇ ಉಪ ಪ್ರಕರಣದ ಉಪಬಂದಗಳ ಅನುಸಾರವಾಗಿ, ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಈ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು– ಭೂ ಅರ್ಜನೆ ಅಧಿಕಾರಿ, ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಲಾಗಿದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5(ಎ) ಪ್ರಕರಣದ ಮೇರೆಗೆ ಉಪ ಆಯುಕ್ತರು (ಭೂಸ್ವಾಧೀನ) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ವಿಶೇಷ ಭೂಸ್ವಾಧೀನಾಧಿಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು, ಇವರನ್ನು ನೇಮಕ ಮಾಡಿದೆ.

ಸದರಿ ಭೂಮಿಯಲ್ಲಿ/ಆಸ್ತಿಯಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ಅಧಿಸೂಚನೆಯು ಪ್ರಕಟವಾದ ತಾರೀಖಿನಿಂದ ಮೂವತ್ತು ದಿನಗಳ ಒಳಗಾಗಿ ಅಥವಾ ಅದಕ್ಕಿಂತ ಮುಂಚೆ ಕರ್ನಾಟಕ ಅಧಿನಿಯಮ 1961ರ 17ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894ರ 3(ಸಿ) ಪ್ರಕರಣದ ಮೇರೆಗೆ ಉಪ ಆಯುಕ್ತರು(ಭೂಸ್ವಾಧೀನ) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು, ಇವರಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು.

ಸದರಿ ಅರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿಗಳ/ಆಸ್ತಿಗಳ ಮೇಲೆ ನಿಯೋಜಿತರಾದ ಯಾವುದೇ ಮೋಜಣಿದಾರರು ಅಥವಾ ಇತರೇ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸದರಿ ಭೂಮಿ/ಆಸ್ತಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಉಪ ಆಯುಕ್ತರು (ಭೂಸ್ವಾಧೀನ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ರವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ/ಆಸ್ತಿಗಳ ವಿಲೇವಾರಿಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿ/ಆಸ್ತಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ(ಏಳನೇ ಖಂಡ) 2ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳತಕ್ಕದಲ್ಲ.

ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕೇಂದ್ರ ಕಛೇರಿ, ನರಸಿಂಹರಾಜು ವೃತ್ತ, ಬೆಂಗಳೂರು. ಇವರ ಕಛೇರಿಯಲ್ಲಿ ಭೂಮಿಗಳ/ಆಸ್ತಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಆರ್.ಎಂ.ವಿ. 2ನೇ ಹಂತದ 8ನೇ ಮುಖ್ಯರಸ್ತೆಯಲ್ಲಿನ ನಿವೇಶನ ಸಂಖ್ಯೆ: 1 ರಿಂದ 7 ರವರೆಗಿನ ಆಸ್ತಿಗಳಲ್ಲಿನ ಒಟ್ಟು 8194.42 ಚ.ಅ. ಜಾಗವನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಮುಖ್ಯ ಮಳೆನೀರುಗಾಲುವೆ ಅಗಲೀಕರಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳುತ್ತಿದ್ದು, ಸದರಿ ಜಾಗದ ವಿವರ ಈ ಕೆಳಕಂಡಂತೆ ಇರುತ್ತದೆ.**

| ಕ್ರ ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಖಾತಾ ನೋಂದಾವಣೆ ಮುನಿಸಿಪಲ್ ಪಿ.ಐ.ಡಿ. ಸಂಖ್ಯೆ | ಭೂಸ್ವಾಧೀನಕ್ಕೆ ಬೇಕಾಗಿರುವ ವಿಸ್ತೀರ್ಣ | | ತರಹೆ | ಚಕ್ಕುಬಂದಿ | | | |
|---|---|---|---|---|---|---|---|---|---|---|
| | | | | (ಚ.ಮೀ.ಗಳಲ್ಲಿ) | (ಚ.ಅ.ಗಳಲ್ಲಿ) | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | | 6 | 7 | 8 | 9 | 10 |
| 01 | ಜಿ.ರಮೇಶ್ ವಿಶ್ವನಾಥ್ | ಜಿ.ರಮೇಶ್ ವಿಶ್ವನಾಥ್ | ನಿವೇಶನ ಸಂಖ್ಯೆ: 01 ಮುನಿಸಿಪಲ್ ಖಾತೆ ಪಿ.ಐ.ಡಿ. ನಂ.100–767–1 D | 72.29 | 778.13 | ಖಾಲಿ ಜಾಗ | ನಿವೇಶನ ಸಂಖ್ಯೆ: 02 | ಖಾಲಿ ಜಾಗ | ಬೃಹತ್ ಮಳೆ ನೀರುಗಾಲುವೆ | 40 ಅಡಿ ರಸ್ತೆ (8ನೇ ಮುಖ್ಯರಸ್ತೆ) |
| 02 | ಜಿ.ಆರ್.ಸುರೇಶ್ | ಜಿ.ಆರ್.ಸುರೇಶ್ | ನಿವೇಶನ ಸಂಖ್ಯೆ: 02 ಮುನಿಸಿಪಲ್ ಖಾತೆ ಪಿ.ಐ.ಡಿ. ನಂ.100–767–1 A | 88.75 | 955.31 | ಖಾಲಿ ಜಾಗ | ನಿವೇಶನ ಸಂಖ್ಯೆ: 03 | ನಿವೇಶನ ಸಂಖ್ಯೆ: 01 | ಬೃಹತ್ ಮಳೆ ನೀರುಗಾಲುವೆ | 40 ಅಡಿ ರಸ್ತೆ (8ನೇ ಮುಖ್ಯರಸ್ತೆ) |
| 03 | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ನಿವೇಶನ ಸಂಖ್ಯೆ: 03 (ಪಾಲಿಕೆಯ ಖಾತಾ ಇರುವುದಿಲ್ಲ) | 105.68 | 1137.54 | ಖಾಲಿ ಜಾಗ | ನಿವೇಶನ ಸಂಖ್ಯೆ: 04 | ನಿವೇಶನ ಸಂಖ್ಯೆ: 02 | ಬೃಹತ್ ಮಳೆ ನೀರುಗಾಲುವೆ | 40 ಅಡಿ ರಸ್ತೆ (8ನೇ ಮುಖ್ಯರಸ್ತೆ) |
| 04 | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ನಿವೇಶನ ಸಂಖ್ಯೆ: 04 (ಪಾಲಿಕೆಯ ಖಾತಾ ಇರುವುದಿಲ್ಲ) | 122.61 | 1319.77 | ಖಾಲಿ ಜಾಗ | ನಿವೇಶನ ಸಂಖ್ಯೆ: 05 | ನಿವೇಶನ ಸಂಖ್ಯೆ: 03 | ಬೃಹತ್ ಮಳೆ ನೀರುಗಾಲುವೆ | 40 ಅಡಿ ರಸ್ತೆ (8ನೇ ಮುಖ್ಯರಸ್ತೆ) |
| 05 | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ನಿವೇಶನ ಸಂಖ್ಯೆ: 05 (ಪಾಲಿಕೆಯ ಖಾತಾ ಇರುವುದಿಲ್ಲ) | 128.56 | 1383.82 | ಖಾಲಿ ಜಾಗ | ನಿವೇಶನ ಸಂಖ್ಯೆ: 06 | ನಿವೇಶನ ಸಂಖ್ಯೆ: 04 | ಬೃಹತ್ ಮಳೆ ನೀರುಗಾಲುವೆ | 40 ಅಡಿ ರಸ್ತೆ (8ನೇ ಮುಖ್ಯರಸ್ತೆ) |
| 06 | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ನಿವೇಶನ ಸಂಖ್ಯೆ: 06 (ಪಾಲಿಕೆಯ ಖಾತಾ ಇರುವುದಿಲ್ಲ) | 123.98 | 1334.52 | ಖಾಲಿ ಜಾಗ | ನಿವೇಶನ ಸಂಖ್ಯೆ: 07 | ನಿವೇಶನ ಸಂಖ್ಯೆ: 05 | ಬೃಹತ್ ಮಳೆ ನೀರುಗಾಲುವೆ | 40 ಅಡಿ ರಸ್ತೆ (8ನೇ ಮುಖ್ಯರಸ್ತೆ) |

| ಕ್ರ ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಖಾತಾ ನೋಂದಾವಣೆ ಮುನಿಸಿಪಲ್ ಪಿ.ಐ.ಡಿ. ಸಂಖ್ಯೆ | ಭೂಸ್ವಾಧೀನಕ್ಕೆ ಬೇಕಾಗಿರುವ ವಿಸ್ತೀರ್ಣ | | ತರಹೆ | ಚಕ್ಕುಬಂದಿ | | | |
|---|---|---|---|---|---|---|---|---|---|---|
| | | | | (ಚ.ಮೀ.ಗಳಲ್ಲಿ) | (ಚ.ಅ.ಗಳಲ್ಲಿ) | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| **1** | **2** | **3** | **4** | **5** | | **6** | **7** | **8** | **9** | **10** |
| 07 | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ನಿವೇಶನ ಸಂಖ್ಯೆ: 07 (ಪಾಲಿಕೆಯ ಖಾತಾ ಇರುವುದಿಲ್ಲ) | 119.41 | 1285.33 | ಖಾಲಿ ಜಾಗ | ಖಾಲಿ ಜಾಗ | ನಿವೇಶನ ಸಂಖ್ಯೆ: 06 | ಬೃಹತ್ ಮಳೆ ನೀರುಗಾಲುವೆ | 40 ಅಡಿ ರಸ್ತೆ (8ನೇ ಮುಖ್ಯರಸ್ತೆ) |
| ಒಟ್ಟು | | | | **761.28** | **8194.42** | | | | | |

ಬೆಂಗಳೂರು

ದಿನಾಂಕ: 27/08/2011

ಪಿಡಿ–140

ಉಪ ಆಯುಕ್ತರು (ಭೂಸ್ವಾಧೀನ)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ.

**ಉಪ ಆಯುಕ್ತರು(ಭೂಸ್ವಾಧೀನ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರ ಕಾರ್ಯಾಲಯ,**
**ಕೇಂದ್ರ ಕಛೇರಿ, ನಗರಪಾಲಿಕೆ ಕಟ್ಟಡಗಳು, 1ನೇ ಮಹಡಿ, ಮೇಜರ್ ರೋಡ್ಸ್ ಬಿಲ್ಡಿಂಗ್, ನರಸಿಂಹರಾಜು ವೃತ್ತ, ಬೆಂಗಳೂರು.**

**ಭೂ ಅರ್ಜನೆ ಅಧಿನಿಯಮದ 4(1)ನೇ ಪ್ರಕರಣದ ಮೇರೆಗೆ ಅಧಿಸೂಚನೆ**

**ಕ್ರಮಾಂಕ:ಎಲ್.ಎ.ಕ್ಯೂ/ಸಿ.ಆರ್/58/2010–11, ದಿನಾಂಕ:27/08/2011**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಚಿಕ್ಕಲಸಂದ್ರ ವಾರ್ಡ್ ಸಂಖ್ಯೆ: 183 (ಹಳೆ ವಾರ್ಡ್ ನಂ.55) ರ ಇಟ್ಟುಮಡು ಗ್ರಾಮದ ಸ್ವತ್ತಿನ ಸಂಖ್ಯೆ: 2, 2/ಎ (ಹಳೆ ಸರ್ವೆ ನಂ. 6/1, 6/2), 2ನೇ ಮುಖ್ಯರಸ್ತೆ, ಬನಶಂಕರಿ 3ನೇ ಹಂತ, ಈ ಸ್ವತ್ತುಗಳಲ್ಲಿನ ಭಾಗಶಃ ವಿಸ್ತೀರ್ಣವಾದ 620.60 ಚ.ಅ. ಜಾಗವು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ, ರಸ್ತೆ ವಿಸ್ತರಣೆ ಮಾಡಲು ಅವಶ್ಯಕವಾಗಿ ಬೇಕಾಗಿರುತ್ತದೆ ಎಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಕಂಡುಬಂದಿರುವುದರಿಂದ:

1976ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ಸ್ ಕಾಯ್ದೆಯ ಕಲಂ 177 ಮತ್ತು ಕರ್ನಾಟಕ ಅಧಿನಿಯಮ ಸಂಖ್ಯೆ:33ರ ಮೂಲಕ ತಿದ್ದುಪಡಿಯಾದ 1991ನೇ ಸಾಲಿನ ಭೂ ಸ್ವಾಧೀನ ಅಧಿನಿಯಮ 1894ರ (ಕೇಂದ್ರ ಅಧಿನಿಯಮ, ಸಂಖ್ಯೆ:1894ರ 1) 4ನೇ ಪ್ರಕರಣದ–(1)ನೇ ಉಪ ಪ್ರಕರಣದ ಉಪಬಂದಗಳ ಅನುಸಾರವಾಗಿ, ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಈ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು– ಭೂ ಅರ್ಜನೆ ಅಧಿಕಾರಿ, ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಲಾಗಿದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5(ಎ) ಪ್ರಕರಣದ ಮೇರೆಗೆ ಉಪ ಆಯುಕ್ತರು (ಭೂಸ್ವಾಧೀನ) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ವಿಶೇಷ ಭೂಸ್ವಾಧೀನಾಧಿಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು, ಇವರನ್ನು ನೇಮಕ ಮಾಡಿದೆ.

ಸದರಿ ಭೂಮಿಯಲ್ಲಿ/ಆಸ್ತಿಯಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ಅಧಿಸೂಚನೆಯು ಪ್ರಕಟವಾದ ತಾರೀಖಿನಿಂದ ಮೂವತ್ತು ದಿನಗಳ ಒಳಗಾಗಿ ಅಥವಾ ಅದಕ್ಕಿಂತ ಮುಂಚೆ ಕರ್ನಾಟಕ ಅಧಿನಿಯಮ 1961ರ 17ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894ರ 3(ಸಿ) ಪ್ರಕರಣದ ಮೇರೆಗೆ ಉಪ ಆಯುಕ್ತರು(ಭೂಸ್ವಾಧೀನ) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು, ಇವರಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು.

ಸದರಿ ಅರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿಗಳ/ಆಸ್ತಿಗಳ ಮೇಲೆ ನಿಯೋಜಿತರಾದ ಯಾವುದೇ ಮೋಜಣಿದಾರರು ಅಥವಾ ಇತರೇ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸದರಿ ಭೂಮಿ/ಆಸ್ತಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಉಪ ಆಯುಕ್ತರು (ಭೂಸ್ವಾಧೀನ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ರವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ/ಆಸ್ತಿಗಳ ವಿಲೇವಾರಿಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿ/ಆಸ್ತಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ(ಏಳನೇ ಖಂಡ) 2ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳತಕ್ಕದಲ್ಲ.

ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕೇಂದ್ರ ಕಛೇರಿ, ನರಸಿಂಹರಾಜು ವೃತ್ತ, ಬೆಂಗಳೂರು. ಇವರ ಕಛೇರಿಯಲ್ಲಿ ಭೂಮಿಗಳ/ಆಸ್ತಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಚಿಕ್ಕಲಸಂದ್ರ ವಾರ್ಡ್ ಸಂಖ್ಯೆ: 183 (ಹಳೆ ವಾರ್ಡ್ ನಂ.55) ರ ಇಟ್ಟುಮಡು ಗ್ರಾಮದ ಸ್ವತ್ತಿನ ಸಂಖ್ಯೆ: 2, 2/ಎ (ಹಳೆ ಸರ್ವೆ ನಂ. 6/1, 6/2), 2ನೇ ಮುಖ್ಯರಸ್ತೆ, ಬನಶಂಕರಿ 3ನೇ ಹಂತ ಇದರಲ್ಲಿ ರಸ್ತೆ ವಿಸ್ತರಣೆ ಮಾಡಲು ಉಪಯೋಗಿಸಿಕೊಳ್ಳಲಾಗಿರುವ ಭಾಗಶಃ ವಿಸ್ತೀರ್ಣವಾದ 620.60 ಚ.ಅ. ಜಾಗವನ್ನು ಭೂಸ್ವಾಧೀನಪಡಿಸಿಕೊಳ್ಳುತ್ತಿದ್ದು, ಸದರಿ ಜಾಗದ ವಿವರ ಈ ಕೆಳಕಂಡಂತೆ ಇದೆ.**

| ಕ್ರ ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಗ್ರಾಮ, ವಾರ್ಡ್ ನಂ., ಸರ್ವೆ ನಂ. ಮತ್ತು ಸ್ವತ್ತಿನ ಸಂಖ್ಯೆ | ಭೂಸ್ವಾಧೀನಕ್ಕೆ ಬೇಕಾಗಿರುವ ವಿಸ್ತೀರ್ಣ ಚ.ಅ.ಗಳಲ್ಲಿ | ತರಹೆ | ಚಕ್ಕುಬಂದಿ | | | |
|---|---|---|---|---|---|---|---|---|---|
| | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 | 9 | 10 |
| 01 | ಶ್ರೀಮತಿ. ಉಷಾ ಶ್ರೀಕಂಠನ್ | ಶ್ರೀಮತಿ. ಉಷಾ ಶ್ರೀಕಂಠನ್ | ಇಟ್ಟುಮಡು ಗ್ರಾಮ, ವಾರ್ಡ್ ನಂ.183 (ಹಳೆ ವಾರ್ಡ್ ನಂ. 55), ಸರ್ವೆ ನಂ.6/1 ಮತ್ತು 6/2, ಸ್ವತ್ತಿನ ಸಂಖ್ಯೆ: 6/1 ಮತ್ತು 6/2–2ಎ | 598.00 | ಖಾಲಿ ಜಾಗ + ಒಂದು ಹುಣಸೆ ಮರ | ಉಳಿಕೆ ಸ್ವತ್ತು | ಇಟ್ಟುಮಡು ಮುಖ್ಯರಸ್ತೆ | ರಸ್ತೆ | ಶಂಕರಿ ಅಪಾರ್ಟ್‌ಮೆಂಟ್ |
| 02 | ಶ್ರೀಮತಿ. ಉಷಾ ಶ್ರೀಕಂಠನ್, ಶ್ರೀಮತಿ. ನೀಲಾದೇವಿ ರಂಗನಾಥನ್ ಮತ್ತು ಶ್ರೀ. ಪ್ರದೀಪ್ ಶ್ರೀಕಂಠನ್ | ಶ್ರೀಮತಿ. ಉಷಾ ಶ್ರೀಕಂಠನ್, ಶ್ರೀಮತಿ ನೀಲಾದೇವಿ ರಂಗನಾಥನ್ ಮತ್ತು ಶ್ರೀ. ಪ್ರದೀಪ್ ಶ್ರೀಕಂಠನ್ | ಇಟ್ಟುಮಡು ಗ್ರಾಮ, ವಾರ್ಡ್ ನಂ.183 (ಹಳೆ ವಾರ್ಡ್ ನಂ. 55), ಸರ್ವೆ ನಂ.6/1–2, ಸ್ವತ್ತಿನ ಸಂಖ್ಯೆ: 6/1–2 | 22.60<br>**ಒಟ್ಟು=620.60 ಚ.ಅ.** | ಖಾಲಿ ಜಾಗ | ಉಳಿಕೆ ಸ್ವತ್ತು | ಇಟ್ಟುಮಡು ಮುಖ್ಯರಸ್ತೆ | ರಸ್ತೆ | ಶಂಕರಿ ಅಪಾರ್ಟ್‌ಮೆಂಟ್ |

ಬೆಂಗಳೂರು.
ದಿನಾಂಕ: 27/08/2011
ಪಿಡಿ–141

ಉಪ ಆಯುಕ್ತರು (ಭೂಸ್ವಾಧೀನ)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ.

**ಉಪ ಆಯುಕ್ತರು(ಭೂಸ್ವಾಧೀನ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರ ಕಾರ್ಯಾಲಯ,**

**ಕೇಂದ್ರ ಕಛೇರಿ, ನಗರಪಾಲಿಕೆ ಕಟ್ಟಡಗಳು, 1ನೇ ಮಹಡಿ, ಮೇಜರ್ ರೋಡ್ಸ್ ಬಿಲ್ಡಿಂಗ್, ನರಸಿಂಹರಾಜು ವೃತ್ತ, ಬೆಂಗಳೂರು.**

**ಭೂ ಅರ್ಜನೆ ಅಧಿನಿಯಮದ 4(1)ನೇ ಪ್ರಕರಣದ ಮೇರೆಗೆ ಅಧಿಸೂಚನೆ**

**ಕ್ರಮಾಂಕ:ಎಲ್.ಎ.ಕ್ಯೂ/ಸಿ.ಆರ್/56/2010–11, ದಿನಾಂಕ:27/08/2011**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ವಾರ್ಡ್ ಸಂಖ್ಯೆ: 17 (ಹಳೆ ವಾರ್ಡ್ ನಂ.02) ರ ಮುತ್ಯಾಲನಗರ 12 'ಎ' ಮುಖ್ಯರಸ್ತೆ ಹಾಗೂ 18 'ಎ' ಅಡ್ಡರಸ್ತೆಗೆ ಸಂಪರ್ಕ ಕಲ್ಪಿಸುವಲ್ಲಿ ಅಡ್ಡಲಾಗಿರುವ ಜಾಲಹಳ್ಳಿ ಗ್ರಾಮದ ಸರ್ವೆ ನಂ. 39 ರಲ್ಲಿನ ಭಾಗಶಃ ವಿಸ್ತೀರ್ಣವಾದ 960 ಚ.ಅ. ಜಾಗವು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ, ರಸ್ತೆ ನಿರ್ಮಾಣಕ್ಕಾಗಿ ಅವಶ್ಯಕವಾಗಿ ಬೇಕಾಗಿರುತ್ತದೆ ಎಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಕಂಡುಬಂದಿರುವುದರಿಂದ:

1976ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ಸ್ ಕಾಯ್ದೆಯ ಕಲಂ 177 ಮತ್ತು ಕರ್ನಾಟಕ ಅಧಿನಿಯಮ ಸಂಖ್ಯೆ:33ರ ಮೂಲಕ ತಿದ್ದುಪಡಿಯಾದ 1991ನೇ ಸಾಲಿನ ಭೂ ಸ್ವಾಧೀನ ಅಧಿನಿಯಮ 1894ರ (ಕೇಂದ್ರ ಅಧಿನಿಯಮ, ಸಂಖ್ಯೆ:1894ರ 1) 4ನೇ ಪ್ರಕರಣದ–(1)ನೇ ಉಪ ಪ್ರಕರಣದ ಉಪಬಂದಗಳ ಅನುಸಾರವಾಗಿ, ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಈ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು– ಭೂ ಅರ್ಜನೆ ಅಧಿಕಾರಿ, ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಲಾಗಿದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5(ಎ) ಪ್ರಕರಣದ ಮೇರೆಗೆ ಉಪ ಆಯುಕ್ತರು (ಭೂಸ್ವಾಧೀನ) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ವಿಶೇಷ ಭೂಸ್ವಾಧೀನಾಧಿಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು, ಇವರನ್ನು ನೇಮಕ ಮಾಡಿದೆ.

ಸದರಿ ಭೂಮಿಯಲ್ಲಿ/ಆಸ್ತಿಯಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ಅಧಿಸೂಚನೆಯು ಪ್ರಕಟವಾದ ತಾರೀಖಿನಿಂದ ಮೂವತ್ತು ದಿನಗಳ ಒಳಗಾಗಿ ಅಥವಾ ಅದಕ್ಕಿಂತ ಮುಂಚೆ ಕರ್ನಾಟಕ ಅಧಿನಿಯಮ 1961ರ 17ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894ರ 3(ಸಿ) ಪ್ರಕರಣದ ಮೇರೆಗೆ ಉಪ ಆಯುಕ್ತರು(ಭೂಸ್ವಾಧೀನ) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು, ಇವರಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು.

ಸದರಿ ಅರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿಗಳ/ಆಸ್ತಿಗಳ ಮೇಲೆ ನಿಯೋಜಿತರಾದ ಯಾವುದೇ ಮೋಜಣಿದಾರರು ಅಥವಾ ಇತರೇ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸದರಿ ಭೂಮಿ/ಆಸ್ತಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಉಪ ಆಯುಕ್ತರು (ಭೂಸ್ವಾಧೀನ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ರವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ/ಆಸ್ತಿಗಳ ವಿಲೇವಾರಿಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿ/ಆಸ್ತಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ(ಏಳನೇ ಖಂಡ) 2ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳತಕ್ಕದಲ್ಲ.

ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕೇಂದ್ರ ಕಛೇರಿ, ನರಸಿಂಹರಾಜು ವೃತ್ತ, ಬೆಂಗಳೂರು. ಇವರ ಕಛೇರಿಯಲ್ಲಿ ಭೂಮಿಗಳ/ಆಸ್ತಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ವಾರ್ಡ್ ಸಂಖ್ಯೆ: 17 (ಹಳೆ ವಾರ್ಡ್ ನಂ.02) ರ ಮುತ್ಯಾಲನಗರ 12 'ಎ' ಮುಖ್ಯರಸ್ತೆ ಹಾಗೂ 18 'ಎ' ಅಡ್ಡರಸ್ತೆಗೆ ಸಂಪರ್ಕ ಕಲ್ಪಿಸುವಲ್ಲಿ ಅಡ್ಡಲಾಗಿರುವ ಜಾಲಹಳ್ಳಿ ಗ್ರಾಮದ ಸರ್ವೆ ನಂ. 39 ರಲ್ಲಿನ ಭಾಗಶಃ ವಿಸ್ತೀರ್ಣವಾದ 960 ಚ.ಅ. ಜಾಗವನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ, ರಸ್ತೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಬೇಕಾಗಿದ್ದು, ಸದರಿ ಜಾಗದ ವಿವರ ಈ ಕೆಳಕಂಡಂತೆ ಇದೆ.**

| ಕ್ರ ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. ಮತ್ತು ಮುನಿಸಿಪಲ್ ಖಾತಾ ನಂ. | ಭೂಸ್ವಾಧೀನಕ್ಕೆ ಬೇಕಾಗಿರುವ ವಿಸ್ತೀರ್ಣ ಚ.ಅ.ಗಳಲ್ಲಿ | ತರಹೆ | ಚಕ್ಕುಬಂದಿ | | | |
|---|---|---|---|---|---|---|---|---|---|
| | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 | 9 | 10 |
| 01 | ಇಂದಿರಾ ಜಗದೀಶ್ ಕೋಂ ಲೇಟ್ ಬಿ.ಜಿ.ಜಗದೀಶ್ | ಇಂದಿರಾ ಜಗದೀಶ್ ಕೋಂ ಲೇಟ್ ಬಿ.ಜಿ.ಜಗದೀಶ್ | ಸರ್ವೆ ನಂ. 39, ನಿವೇಶನ ಸಂಖ್ಯೆ: 108 ಮತ್ತು ಮುನಿಸಿಪಲ್ ಖಾತಾ ನಂ. 36 | 800.00 | ನಿವೇಶನ | ರಸ್ತೆ | ಸರ್ಕಾರಿ/ ಕಾರ್ಪೊರೇಷನ್ ಸ್ವತ್ತು | ಕೃಷ್ಣಮೂರ್ತಿ ರವರ ಸ್ವತ್ತು | 109ನೇ ನಿವೇಶನ |
| 02 | ಸರ್ಕಾರಿ/ ಕಾರ್ಪೊರೇಷನ್ | ಇಂದಿರಾ ಜಗದೀಶ್ ಕೋಂ ಲೇಟ್ ಬಿ.ಜಿ.ಜಗದೀಶ್ | ಸರ್ವೆ ನಂ. 39 | 160.00<br>ಒಟ್ಟು=960 ಚ.ಅ. | ಖಾಲಿ ಜಾಗ | ನಿವೇಶನ ಸಂಖ್ಯೆ: 108, ಖಾತಾ ನಂ. 36 (ಹೊಸದು), ಪಿ.ಐ.ಡಿ ನಂ. 2–74–36 | ರಸ್ತೆ | ಕೃಷ್ಣಮೂರ್ತಿ ರವರ ಸ್ವತ್ತು | 109ನೇ ನಿವೇಶನ |

ಬೆಂಗಳೂರು.
ದಿನಾಂಕ: 27/08/2011
ಪಿಡಿ–142

ಉಪ ಆಯುಕ್ತರು (ಭೂಸ್ವಾಧೀನ)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ.

**ಉಪ ಆಯುಕ್ತರು(ಭೂಸ್ವಾಧೀನ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರ ಕಾರ್ಯಾಲಯ,**
**ಕೇಂದ್ರ ಕಛೇರಿ, ನಗರಪಾಲಿಕೆ ಕಟ್ಟಡಗಳು, 1ನೇ ಮಹಡಿ, ಮೇಜರ್ ರೋಡ್ಸ್ ಬಿಲ್ಡಿಂಗ್, ನರಸಿಂಹರಾಜು ವೃತ್ತ, ಬೆಂಗಳೂರು.**
**ಭೂ ಅರ್ಜನೆ ಅಧಿನಿಯಮದ 4(1)ನೇ ಪ್ರಕರಣದ ಮೇರೆಗೆ ಅಧಿಸೂಚನೆ**
**ಕ್ರಮಾಂಕ:ಎಲ್1/ಪಿ.ಆರ್/31/2001–02, ದಿನಾಂಕ:27/08/2011**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ವಾರ್ಡ್ ಸಂಖ್ಯೆ: 50, ತ್ಯಾಗರಾಜನಗರ, 3ನೇ ಬ್ಲಾಕ್, 7ನೇ 'ಎ' ಮುಖ್ಯರಸ್ತೆಯಲ್ಲಿರುವ ನಿವೇಶನ ಸಂಖ್ಯೆ: 258 ರ ಸ್ವತ್ತಿನಲ್ಲಿನ ಒಟ್ಟು 1500 ಚ.ಅ. ಜಾಗವು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ರಸ್ತೆ ನಿರ್ಮಾಣ ಮಾಡಲು ಅವಶ್ಯಕವಾಗಿ ಬೇಕಾಗಿರುತ್ತದೆ ಎಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಕಂಡುಬಂದಿರುವುದರಿಂದ:

1976ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ಕಾಯ್ದೆಯ ಕಲಂ 177 ಮತ್ತು ಕರ್ನಾಟಕ ಅಧಿನಿಯಮ ಸಂಖ್ಯೆ:33ರ ಮೂಲಕ ತಿದ್ದುಪಡಿಯಾದ 1991ನೇ ಸಾಲಿನ ಭೂ ಸ್ವಾಧೀನ ಅಧಿನಿಯಮ 1894ರ (ಕೇಂದ್ರ ಅಧಿನಿಯಮ, ಸಂಖ್ಯೆ:1894ರ 1) 4ನೇ ಪ್ರಕರಣದ–(1)ನೇ ಉಪ ಪ್ರಕರಣದ ಉಪಬಂದಗಳ ಅನುಸಾರವಾಗಿ, ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಈ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು– ಭೂ ಅರ್ಜನೆ ಅಧಿಕಾರಿ, ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಲಾಗಿದೆ.

ಸದರಿ ಅಧಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5(ಎ) ಪ್ರಕರಣದ ಮೇರೆಗೆ ಉಪ ಆಯುಕ್ತರು (ಭೂಸ್ವಾಧೀನ) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ವಿಶೇಷ ಭೂಸ್ವಾಧೀನಾಧಿಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು, ಇವರನ್ನು ನೇಮಕ ಮಾಡಿದೆ.

ಸದರಿ ಭೂಮಿಯಲ್ಲಿ/ಆಸ್ತಿಯಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ಅಧಿಸೂಚನೆಯು ಪ್ರಕಟವಾದ ತಾರೀಖಿನಿಂದ ಮೂವತ್ತು ದಿನಗಳ ಒಳಗಾಗಿ ಅಥವಾ ಅದಕ್ಕಿಂತ ಮುಂಚೆ ಕರ್ನಾಟಕ ಅಧಿನಿಯಮ 1961ರ 17ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894ರ 3(ಸಿ) ಪ್ರಕರಣದ ಮೇರೆಗೆ ಉಪ ಆಯುಕ್ತರು(ಭೂಸ್ವಾಧೀನ) ರವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು, ಇವರಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು.

ಸದರಿ ಅರ್ಜನೆ ಉದ್ದೇಶಕ್ಕಾಗಿ ಸದರಿ ಭೂಮಿಗಳ/ಆಸ್ತಿಗಳ ಮೇಲೆ ನಿಯೋಜಿತರಾದ ಯಾವುದೇ ಮೋಜಣಿದಾರರು ಅಥವಾ ಇತರೇ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸದರಿ ಭೂಮಿ/ಆಸ್ತಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಉಪ ಆಯುಕ್ತರು (ಭೂಸ್ವಾಧೀನ), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ರವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ, ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ/ಆಸ್ತಿಗಳ ವಿಲೇವಾರಿಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿ/ಆಸ್ತಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಸದರಿ ಅಧಿನಿಯಮದ(ಏಳನೇ ಖಂಡ) 2ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳತಕ್ಕದಲ್ಲ.

ವಿಶೇಷ ಭೂಸ್ವಾಧೀನಾಕಾರಿಗಳು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕೇಂದ್ರ ಕಛೇರಿ, ನರಸಿಂಹರಾಜು ವೃತ್ತ, ಬೆಂಗಳೂರು. ಇವರ ಕಛೇರಿಯಲ್ಲಿ ಭೂಮಿಗಳ/ಆಸ್ತಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ವಾರ್ಡ್ ಸಂಖ್ಯೆ: 50, ತ್ಯಾಗರಾಜನಗರ, 3ನೇ ಬ್ಲಾಕ್, 7ನೇ 'ಎ' ಮುಖ್ಯರಸ್ತೆಯಲ್ಲಿರುವ ನಿವೇಶನ ಸಂಖ್ಯೆ: 258 ರಲ್ಲಿ ರಸ್ತೆ ನಿರ್ಮಾಣಕ್ಕಾಗಿ ಉಪಯೋಗಿಸಿಕೊಳ್ಳಲಾಗಿರುವ ಒಟ್ಟು 1500 ಚ.ಅ. ಜಾಗವನ್ನು ಭೂಸ್ವಾಧೀನಪಡಿಸಿಕೊಳ್ಳುತ್ತಿದ್ದು, ಸದರಿ ಜಾಗದ ವಿವರ ಈ ಕೆಳಕಂಡಂತೆ ಇದೆ.**

| ಕ್ರ. ಸಂ. | ಖಾತೇದಾರರ ಹೆಸರು | ಅನುಭವದಾರರ ಹೆಸರು | ನಿವೇಶನ ಸಂಖ್ಯೆ | ಭೂಸ್ವಾಧೀನಕ್ಕೆ ಬೇಕಾಗಿರುವ ವಿಸ್ತೀರ್ಣ ಚ.ಅ.ಗಳಲ್ಲಿ | ತರಹೆ | ಚಕ್ಕುಬಂದಿ | | | |
|---|---|---|---|---|---|---|---|---|---|
| | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 | 9 | 10 |
| 01 | ಎನ್.ಆರ್.ಸುಬ್ರಮಣ್ಯಂ | ಎನ್.ಆರ್.ಸುಬ್ರಮಣ್ಯಂ | ನಂ.258, 7 'ಎ' ಮುಖ್ಯರಸ್ತೆ, 3ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು. | 1500 ಚ.ಅ | ಖಾಲಿ ಜಾಗ | ಕೆ.ಜಿ.ಕೃಷ್ಣಮೂರ್ತಿ ರವರ ವಾಸದ ಮನೆ | 27/1 ಸಿ.ಕಾಂತ್, 27/3 ಸಿ.ಚೆನ್ನಪ್ಪ ಮತ್ತು 27 ಮೋಹನ್ ರವರ ವಾಸದ ಮನೆ | 7ನೇ ಅಡ್ಡ ರಸ್ತೆ | ಹಾಲಿ 7ನೇ 'ಎ' ಮುಖ್ಯರಸ್ತೆ ನಂತರ 8ನೇ ಅಡ್ಡರಸ್ತೆ |

ಬೆಂಗಳೂರು.
ದಿನಾಂಕ: 27/08/2011
ಪಿಡಿ–143

ಉಪ ಆಯುಕ್ತರು (ಭೂಸ್ವಾಧೀನ)
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ.